## ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 462

2 ಸದಸ್ಯರ ಹೆಸರು : ಶ್ರೀ ಪುಟ್ಟಣ್ಣ (ಶಿಕ್ಷಕರ ಕ್ಷೇತ್ರ)

3 ಉತ್ತರಿಸುವ ದಿನಾಂಕ : 16.12.2021

4 ಉತ್ತರಿಸುವ ಸಚಿವರು : ಗೃಹ ಸಚಿವರು

| ಪ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಡಿಟೆಕ್ಟಿವ್ ಇನ್ಸ್‌ಪೆಕ್ಟರ್‌ಗಳನ್ನು ಸಿವಿಲ್ ಹುದ್ದೆಗೆ ತಂದಾಗ ಸಿವಿಲ್ ವಿಭಾಗದ ಹಿರಿಯ ಅಧಿಕಾರಿಗಳಿಗೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: 1994 ನೇ ಬ್ಯಾಚ್‌ನ ಸಿವಿಲ್ ಅಧಿಕಾರಿಗಳ ಮೇಲೆ 2002 ರ ಬ್ಯಾಚ್‌ನ ಡಿಟೆಕ್ಟಿವ್ ಅಧಿಕಾರಿಗಳನ್ನು ಎಸ್.ಪಿಯಾಗಿ ಮಾಡಿರುವುದರಿಂದ ಸಿವಿಲ್ ಅಧಿಕಾರಿಗಳ ಹಿರಿತನ ಕಡೆಗಣನೆ ಮಾಡಿರುವುದು ಯಾವ ಕಾರಣಕ್ಕೆ ; (ವಿವರ ನೀಡುವುದು) | ಡಿಟೆಕ್ಟಿವ್ ಇನ್ಸ್‌ಪೆಕ್ಟರ್‌ಗಳನ್ನು ಸಿವಿಲ್ ಹುದ್ದೆಗೆ ತಂದಾಗ ಸಿವಿಲ್ ವಿಭಾಗದ ಹಿರಿಯ ಅಧಿಕಾರಿಗಳಿಗೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br><br>ಸಿವಿಲ್ ಮತ್ತು ಸಿಐಡಿ ಘಟಕದ ಡಿಟೆಕ್ಟಿವ್ ಅಧಿಕಾರಿಗಳಿಗೆ ಸಂಬಂಧಪಟ್ಟಂತೆ ಪ್ರತ್ಯೇಕ ಮಂಜೂರಾತಿ ಬಲ ಮತ್ತು ವೃಂದ ಮತ್ತು ನೇಮಕಾತಿ ನಿಯಮಗಳು ಜಾರಿಯಲ್ಲಿರುತ್ತದೆ.<br>ಸಿಐಡಿ ಘಟಕದ ಮಂಜೂರಾತಿ ಬಲ ಮತ್ತು ವೃಂದ ಮತ್ತು ನೇಮಕಾತಿ ನಿಯಮ 1994 ರನ್ವಯ ಜ್ಯೇಷ್ಠತೆ, ಅರ್ಹತೆ ಮತ್ತು ರಿಕ್ತಸ್ಥಾನಗಳನ್ನಾಧರಿಸಿ 2002 ರ ಬ್ಯಾಚಿನ ಡಿಟೆಕ್ಟಿವ್ ಡಿವೈಎಸ್‌ಪಿ ರವರುಗಳಿಗೆ ಎಸ್‌ಪಿ ಹುದ್ದೆಗೆ ಮುಂಬಡ್ತಿ ನೀಡಲಾಗಿರುತ್ತದೆ.<br>ಡಿಟೆಕ್ಟೀವ್ ವೃಂದದಲ್ಲಿ ನೇರ ನೇಮಕಾತಿ ಅಡಿ 2002 ನೇ ಬ್ಯಾಚಿನ್ ಪಿಎಸ್‌ಐಗಳು ಮೊದಲನೇ ಬ್ಯಾಚ್ ಆಗಿ ನೇಮಕಾತಿ ಹೊಂದಿದ್ದು ಜ್ಯೇಷ್ಠತೆ, ಅರ್ಹತೆ ಮತ್ತು ರಿಕ್ತಸ್ಥಾನಗಳನ್ನಾಧರಿಸಿ ಮುಂಬಡ್ತಿ ಹೊಂದಿರುತ್ತಾರೆ. ಇದರಿಂದಾಗಿ ಯಾವುದೇ ಅಧಿಕಾರಿಗಳ ಹಿರಿತನವನ್ನು ಕಡೆಗಣಿಸಿರುವುದಿಲ್ಲ. |
| ಆ) | ಡಿಟೆಕ್ಟಿವ್ ಡಿಎಸ್‌ಪಿ/ಎಸ್‌ಪಿ ಅಡಿಯಲ್ಲಿ ಕೆಲಸ ಮಾಡಲು ಡಿಟೆಕ್ಟಿವ್ ಪಿ.ಎಸ್.ಐ/ಪಿ.ಐ ಇಲ್ಲದೆ ಇದ್ದಾಗಲು ಅವರುಗಳಿಗೆ 05 ವರ್ಷಗಳಿಗೊಮ್ಮೆ ಬಡ್ತಿ ನೀಡುತ್ತಿದ್ದು, 05 ವರ್ಷಗಳ ಅಂತರದಲ್ಲಿ ಡಿಟೆಕ್ಟಿವ್ ಇನ್ಸ್‌ಪೆಕ್ಟರ್ ಬಡ್ತಿ ನೀಡಿದ ಮೇಲೆ ಸಿವಿಲ್ ಇನ್ಸ್‌ಪೆಕ್ಟರ್‌ಗಳಿಗೆ 05 ವರ್ಷಗಳ ಅಂತರದಲ್ಲಿ ಬಡ್ತಿ ನೀಡದಿರಲು ಕಾರಣಗಳೇನು; (ವಿವರ ನೀಡುವುದು) | ಸಿವಿಲ್ ವೃಂದದಲ್ಲಿ ಕೆಳಹಂತದಲ್ಲಿ ಅಧಿಕಾರಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದು, ಡಿವೈಎಸ್‌ಪಿ/ಎಸ್‌ಪಿ ರಿಕ್ತಸ್ಥಾನಗಳು ಕಡಿಮೆ ಇರುತ್ತದೆ. ಆದುದರಿಂದ, ಸಿವಿಲ್ ವೃಂದದ ಅಧಿಕಾರಿಗಳಿಗೆ ಮುಂಬಡ್ತಿ ಅವಕಾಶಗಳು ಡಿಟೆಕ್ಟೀವ್ ಅಧಿಕಾರಿಗಳಿಗಿಂತ ಕಡಿಮೆ ಇರುತ್ತದೆ. ರಿಕ್ತಸ್ಥಾನಗಳಿಗನುಗುಣವಾಗಿ ಸಿವಿಲ್ ವೃಂದದ ಅಧಿಕಾರಿಗಳಿಗೆ ಜೇಷ್ಠತೆ ಮತ್ತು ಅರ್ಹತೆಯನ್ನು ಪರಿಗಣಿಸಿ ಕಾಲಕಾಲಕ್ಕೆ ಮುಂಬಡ್ತಿ ನೀಡಲಾಗಿದೆ. |

| | | |
|---|---|---|
| ಇ) | ನಾನ್ ಐಪಿಎಸ್ ಹುದ್ದೆಯಲ್ಲಿ ಐಪಿಎಸ್ ಅಧಿಕಾರಿಗಳು ಇರುವುದಕ್ಕೆ ಕಾರಣವೇನು; ಕನ್ನಡಿಗರ ನಾನ್ ಐಪಿಎಸ್ ಹುದ್ದೆಯನ್ನು ಐಪಿಎಸ್ ಹುದ್ದೆಗೆ ಬದಲಾಯಿಸಿ ಕನ್ನಡಿಗರಿಗೆ ಅನ್ಯಾಯ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನಾನ್ ಐಪಿಎಸ್ ಹುದ್ದೆಗಳಿಗೆ ಐಪಿಎಸ್ ಅಧಿಕಾರಿಗಳನ್ನು ಹಾಗೂ ಐಪಿಎಸ್ ಹುದ್ದೆಗಳಿಗೆ ನಾನ್ ಐಪಿಎಸ್ ಅಧಿಕಾರಿಗಳನ್ನು ವರ್ಗಾವಣೆಗೊಳಿಸಿ ನೇಮಕ ಮಾಡಲಾಗುತ್ತಿದೆ. ರಾಜ್ಯದಲ್ಲಿ ಎಸ್‌ಪಿ ವೃಂದದಲ್ಲಿ 57 ಕೇಡರ್ ಹುದ್ದೆಗಳ ಮಂಜೂರಾತಿ ಬಲವಿರುತ್ತದೆ ಆದರೆ ಪ್ರಸ್ತುತ, 83 ಎಸ್‌ಪಿ ಐಪಿಎಸ್ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿರುತ್ತಾರೆ.<br><br>ಕನ್ನಡಿಗರ ನಾನ್ ಐಪಿಎಸ್ ಹುದ್ದೆಯನ್ನು ಐಪಿಎಸ್ ಹುದ್ದೆಗೆ ಬದಲಾಯಿಸಿ ಕನ್ನಡಿಗರಿಗೆ ಅನ್ಯಾಯ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ) | ಮಂಜೂರಾದ ಹುದ್ದೆಗಳಿಗೆ ಅನುಗುಣವಾಗಿ ಖಾಲಿ ಇರುವ 25 ನಾನ್ ಐಪಿಎಸ್ ಎಸ್‌ಪಿ ಹುದ್ದೆಗೆ ಯಾವ ಕಾಲಮಿತಿಯಲ್ಲಿ ಬಡ್ತಿ ನೀಡಲಾಗುವುದು; (ವಿವರ ನೀಡುವುದು) | ಪ್ರಸ್ತುತ ಎಸ್‌ಪಿ (ನಾನ್ ಐಪಿಎಸ್) ವೃಂದದಲ್ಲಿ 03 ಹುದ್ದೆಗಳು ಮಾತ್ರ ಖಾಲಿಯಿರುತ್ತದೆ. 02 ನಾನ್ ಐಪಿಎಸ್ ವೃಂದದ ಅಧಿಕಾರಿಗಳ ಸ್ಥಳ ನಿರೀಕ್ಷಣೆಯಲ್ಲಿರುತ್ತಾರೆ. |
| ಉ) | ಐಪಿಎಸ್ ಹುದ್ದೆಗಳು ಖಾಲಿ ಇಲ್ಲದೆ ಇದ್ದಾಗಲೂ ಐಪಿಎಸ್ ಅಧಿಕಾರಿಗಳನ್ನು ರಾಜ್ಯದಲ್ಲಿ ನೇಮಕಾತಿ ಮಾಡಿಕೊಳ್ಳುವುದರಿಂದ, ರಾಜ್ಯದಲ್ಲಿ ಬಡ್ತಿಗಾಗಿ ಕಾಯುತ್ತಿರುವ ಅಧಿಕಾರಿಗಳಿಗೆ ಅನ್ಯಾಯವಾಗುತ್ತಿದ್ದು, ಸದರಿಯವರಿಗೆ ಬಡ್ತಿ ನೀಡಲು ಸರ್ಕಾರದ ಕ್ರಮವೇನು? (ವಿವರ ನೀಡುವುದು) | ನೇರ ನೇಮಕಾತಿ ಅಡಿಯಲ್ಲಿ ಮಂಜೂರಾದ ಐಪಿಎಸ್ ಹುದ್ದೆಗಳನ್ನು ಕೇಂದ್ರ ಗೃಹ ಮಂತ್ರಾಲಯದಿಂದ ಕರ್ನಾಟಕ ರಾಜ್ಯಕ್ಕೆ ಹಂಚಿಕೆ ಮಾಡಲಾದ ಹುದ್ದೆಗಳ ಆಧಾರದ ಮೇಲೆ ಭರ್ತಿ ಮಾಡಲಾಗುತ್ತಿದೆ. ನಾನ್ ಐಪಿಎಸ್ ಹುದ್ದೆಗಳಿಗೆ ಐಪಿಎಸ್ ಅಧಿಕಾರಿಗಳನ್ನು ಹಾಗೂ ಐಪಿಎಸ್ ಹುದ್ದೆಗಳಿಗೆ ನಾನ್ ಐಪಿಎಸ್ ಅಧಿಕಾರಿಗಳನ್ನು ವರ್ಗಾವಣೆಗೊಳಿಸಿ ನೇಮಕ ಮಾಡಲಾಗುತ್ತಿರುತ್ತದೆ.<br>ಡಿವೈಎಸ್‌ಪಿ ಹುದ್ದೆಯಿಂದ ಎಸ್‌ಪಿ (ನಾನ್ ಐಪಿಎಸ್) ಹುದ್ದೆಗೆ ಮುಂಬಡ್ತಿಯನ್ನು ಜ್ಯೇಷ್ಠತೆ ಮತ್ತು ಅರ್ಹತೆ ಹಾಗೂ ರಿಕ್ತಸ್ಥಾನಗಳನ್ನಾಧರಿಸಿ ಆಗ್ಗಿಂದಾಗ್ಗೆ ಮುಂಬಡ್ತಿ ನೀಡಲಾಗುತ್ತಿರುತ್ತದೆ. |

ಸಂಖ್ಯೆ: ಒಇ 286 ಪಿಇಜಿ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು